# ಆರಂಭಿಕ ಕಲಿಕೆಯತ್ತ ತೀವ್ರ ಗಮನ ಸದ್ಯದ ಅಗತ್ಯ

ನಂದಿನಿ ಶೆಟ್ಟಿ

***

ಶಾಲೆಯು ಮಕ್ಕಳಿಗೆ ವಿವಿಧ ವಿಷಯಗಳನ್ನು ಕಲಿಯಲು ಅನುವು ಮಾಡಿಕೊಡುವುದು ಮಾತ್ರವೇ ಅಲ್ಲದೆ, ಅವರ ಸಾಮಾಜಿಕ, ಭಾವನಾತ್ಮಕ ಮತ್ತು ಅರಿವಿನ ಬೆಳವಣಿಗೆಗೆ ಅಡಿಪಾಯವನ್ನು ಹಾಕಿಕೊಡುತ್ತದೆ. ಮಕ್ಕಳು ಇತರ ಮಕ್ಕಳೊಂದಿಗೆ ಕೂಡಿ ಕಲಿಯುವಾಗ ಉತ್ತಮವಾಗಿ ಮತ್ತು ವೇಗವಾಗಿ ಕಲಿಯುತ್ತಾರೆ. ಶಾಲೆಯು ಮಕ್ಕಳನ್ನು ಕೌಟುಂಬಿಕ ಸಮಸ್ಯೆಗಳಿಂದ, ಬಾಲಕಾರ್ಮಿಕರ ಸಮಸ್ಯೆ ಮತ್ತು ಮಾದಕ ವಸ್ತುಗಳ ಸೇವನೆಯ ವ್ಯಸನಗಳಂತಹ ಸಾಮಾಜಿಕ ಅನಿಷ್ಟಗಳಿಂದ ದೂರವಿಡುತ್ತದೆ. ಶಾಲೆಗಳನ್ನು ಮುಚ್ಚಿದ್ದರಿಂದಾಗಿ ಮಕ್ಕಳು ಕಲಿಕೆಯ ನಷ್ಟದ ಜೊತೆಜೊತೆಗೆ ಹಲವಾರು ಕೌಟುಂಬಿಕ ಹಾಗೂ ಸಾಮಾಜಿಕ ಸಮಸ್ಯೆಗಳನ್ನು ಎದುರಿಸಬೇಕಾಯಿತು. ಮಕ್ಕಳಲ್ಲಿ ಹೆಚ್ಚಿನವರು ಓದುಬರಹದೊಂದಿಗೆ **ಸರಳ ಲೆಕ್ಕಾಚಾರವನ್ನು** ಮರೆತಿದ್ದು, ಇದು ಮುಂದೆ ಅವರು ಶಾಲೆಗೆ ಬರುವುದಕ್ಕೆ ತೊಡಕಾಗಬಹುದು. ಆದ್ದರಿಂದ ಶಾಲೆಗಳನ್ನು ತೆರೆದು ಮಕ್ಕಳ ಕಲಿಕೆಗೆ ಅನುಕೂಲ ಮಾಡಿಕೊಡುವುದು ಬಹಳ ಮುಖ್ಯ.

### ಸೇತುಬಂಧ ಕಾರ್ಯಕ್ರಮ

ಶಾಲೆಗಳನ್ನು ಮುಚ್ಚಿದ ಸಮಯದಲ್ಲಿ ನಿರಂತರ ಕಲಿಕೆಯನ್ನು ಖಾತರಿಪಡಿಸಲು ನಮ್ಮ ಸರ್ಕಾರಿ ಶಾಲೆಗಳಲ್ಲಿ ಸೇತುಬಂಧ[1] ಕಾರ್ಯಕ್ರಮಗಳನ್ನು ನಡೆಸಲಾಗಿದ್ದು, ಇದರ ಭಾಗವಾಗಿ ಮಕ್ಕಳಿಗೆ ಕಾರ್ಯಹಾಳೆಗಳನ್ನು ಒದಗಿಸಿಕೊಡಲಾಗಿತ್ತು. 4 ಮತ್ತು 5ನೇ ತರಗತಿಯ ಮಕ್ಕಳಿಗೆ ಸೇತುಬಂಧ ಕಾರ್ಯಕ್ರಮವನ್ನು 45 ದಿನಗಳ ಕಾಲ ನಡೆಸಲಾಯಿತು. ಕಾರ್ಯಹಾಳೆಗಳನ್ನು ಪಡೆದುಕೊಳ್ಳಲು ತಮ್ಮ ಪೋಷಕರೊಂದಿಗೆ ಶಾಲೆಗೆ ಬರುವಂತೆ ಮಕ್ಕಳಿಗೆ ತಿಳಿಸಲಾಗಿತ್ತು. ಮಕ್ಕಳು ಶಾಲೆಗೆ ಬರಲು ಸಾಧ್ಯವಾಗದಿರುವ ಕಡೆಗಳಲ್ಲಿ ಶಿಕ್ಷಕರೇ ಕಾರ್ಯಹಾಳೆಗಳನ್ನು ಸಮುದಾಯಕ್ಕೆ ಕೊಂಡೊಯ್ದು ವಿತರಿಸಿದರು. ಈ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಹಲವು ಸವಾಲುಗಳಿದ್ದವು.

### ಕಾರ್ಯಹಾಳೆಗಳು

ಕಲಿತ ಪರಿಕಲ್ಪನೆಗಳನ್ನು ಅಭ್ಯಾಸ ಮಾಡಲು ಮತ್ತು ಮೌಲ್ಯಮಾಪನ ಮಾಡಲು ಕಾರ್ಯಹಾಳೆಗಳನ್ನು ಪರಿಣಾಮಕಾರಿಯಾಗಿ ಬಳಸಬಹುದು. ಆದರೆ ಪರಿಕಲ್ಪನೆಗಳನ್ನು ರೂಪಿಸಲು ಕಾರ್ಯಹಾಳೆಗಳನ್ನು ಬಳಸುವುದು ಕಷ್ಟ. ಪಾಲಕರು ತಮ್ಮ ದುಡಿಮೆಗಾಗಿ ಮನೆಯಿಂದ ಹೊರಹೋಗುವಾಗ ತಮ್ಮ ಮೊಬೈಲ್ ಫೋನ್‌ಗಳನ್ನು ತಮ್ಮೊಂದಿಗೆ ಕೊಂಡೊಯ್ಯುವುದರಿಂದ ಶಿಕ್ಷಕರು ಎಲ್ಲ ಮಕ್ಕಳನ್ನು ಫೋನ್ ಮೂಲಕ ಸಂಪರ್ಕಿಸುವುದು ಸಾಧ್ಯವಾಗದೆ ಹೋಯಿತು. ಶಿಕ್ಷಕರಲ್ಲಿ ಹೆಚ್ಚಿನವರು ಕೋವಿಡ್–19 ಪರಿಹಾರ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರಿಂದಾಗಿ ಮಕ್ಕಳು ತಮ್ಮ ಸಂದೇಹ ಪರಿಹರಿಸಿಕೊಳ್ಳಲು ಮತ್ತು

ಪ್ರಶ್ನೆಗಳನ್ನು ಕೇಳಿ ತಿಳಿದುಕೊಳ್ಳಲು ಶಾಲೆಗೆ ಬಂದಾಗ ಅವರು ಶಾಲೆಗಳಲ್ಲಿ ಇರಲಿಲ್ಲ. ಈ ಕಾರ್ಯಹಾಳೆಗಳಲ್ಲಿ ಹೆಚ್ಚಿನವುಗಳನ್ನು ಆಯಾ ತರಗತಿಯ ಹಂತಕ್ಕೆ ನಿರ್ದಿಷ್ಟವಾದ ಪರಿಕಲ್ಪನೆಗಳನ್ನು ಅಭ್ಯಾಸ ಮಾಡಲು ಉದ್ದೇಶಿಸಿ ರೂಪಿಸಲಾಗಿತ್ತು. ಅವು ಹಿಂದಿನ ವರ್ಷಗಳಲ್ಲಿ ಕಲಿಸಿದ ಪರಿಕಲ್ಪನೆಗಳೊಂದಿಗೆ ಸಂಬಂಧ ಹೊಂದಿದವುಗಳಾಗಿರಲಿಲ್ಲ. ಮಕ್ಕಳಿಗೆ ಓದಲು ಬರೆಯಲು ಸಾಧ್ಯವಾಗದಿರುವುದರಿಂದಾಗಿ ಮತ್ತು ಹಿಂದಿನ ವರ್ಷಗಳಲ್ಲಿ ಕಲಿತುದನ್ನು ಮಕ್ಕಳು ಈಗಾಗಲೇ ಮರೆತುಬಿಟ್ಟಿದ್ದರಿಂದಾಗಿ ಕಾರ್ಯಹಾಳೆಗಳಲ್ಲಿ ಕೊಡಲಾದ ಪ್ರಶ್ನೆಗಳನ್ನು ಓದಿ ಅರ್ಥಮಾಡಿಕೊಂಡು ಅವುಗಳಿಗೆ ಉತ್ತರ ಬರೆಯುವುದು ಅವರಿಂದ ಸಾಧ್ಯವಾಗಲಿಲ್ಲ. ಉತ್ತರಿಸದೆ ಖಾಲಿಬಿಟ್ಟ ಕಾರ್ಯಹಾಳೆಗಳನ್ನು ಅಥವಾ ಹಿಂದಿನ ಬಾರಿ ಉತ್ತರಿಸಿದ ಕಾರ್ಯಹಾಳೆಗಳಿಂದ ನಕಲು ಮಾಡಿದ ಉತ್ತರಗಳನ್ನು ಹೊಂದಿರುವ ಕಾರ್ಯಹಾಳೆಗಳನ್ನು ಅವರು ಹಿಂದಿರುಗಿಸುತ್ತಿದ್ದರು. ಹಾಗಾಗಿ, ಸೇತುಬಂಧ ಕಾರ್ಯಕ್ರಮವನ್ನು ಅರ್ಥಪೂರ್ಣವಾಗಿ ಅನುಷ್ಠಾನಗೊಳಿಸುವುದು ಸಾಧ್ಯವಾಗಲಿಲ್ಲ ಎಂದೇ ಹೇಳಬಹುದು.

**ಕಲಿಕಾ ನಷ್ಟ**

ಕಳೆದ ಒಂದೂವರೆ ವರ್ಷಗಳಿಂದ ಶಾಲೆ ಮುಚ್ಚಿರುವುದು ಮಕ್ಕಳ ಕಲಿಕೆಯ ಮೇಲೆ ಬೇರೆ ಬೇರೆ ರೀತಿಯ ಪರಿಣಾಮಗಳನ್ನು ಉಂಟುಮಾಡಿದೆ. ನಾನು ಮಕ್ಕಳ ಕಲಿಕೆಯಲ್ಲಿ ನನ್ನನ್ನು ತೊಡಗಿಸಿಕೊಂಡಿರುವ ಶಾಲೆಗಳಲ್ಲಿ ವೇಗವಾಗಿ ಕಲಿಯುವ ಮಕ್ಕಳು ಕೂಡ ಹಿಂದಿನ ತರಗತಿಗಳಲ್ಲಿ ಕಲಿತ ಆರಂಭಿಕ ಹಂತದ ಕೌಶಲಗಳನ್ನು (ಓದುವಿಕೆ, ಗುಣಾಕಾರ ಮತ್ತು ಭಾಗಾಕಾರ) ಪ್ರದರ್ಶಿಸುವುದಕ್ಕೂ ಹೆಣಗುತ್ತಿರುವುದನ್ನು ಗಮನಿಸಿದ್ದೇನೆ. ಹಾಗಿದ್ದರೂ, ನಾವು ಈ ಪರಿಕಲ್ಪನೆಗಳ ಮರುಕಲಿಕೆಗಾಗಿ ಅವರೊಂದಿಗೆ ಪ್ರಯತ್ನಪಟ್ಟಾಗ ಕಲಿತುದನ್ನು ನೆನಪಿಗೆ ತಂದುಕೊಳ್ಳಲು ಮತ್ತು ಬೇಗನೆ ಕಲಿಯಲು ಅವರಿಗೆ ಸಾಧ್ಯವಾಗುತ್ತದೆ. ಮತ್ತೊಂದೆಡೆ, ಕಲಿಕೆಯಲ್ಲಿ ನಿಧಾನವಾಗಿರುವ ಮಕ್ಕಳು, ಅಂದರೆ, ಶ್ರೇಣೀಕೃತ ವಿಧಾನದಲ್ಲಿ (ಉದಾಹರಣೆಗೆ, ಗಣಿತ ಕಲಿಕೆಯಲ್ಲಿ ಪ್ರಾರಂಭದಲ್ಲಿ ಈ ಮಕ್ಕಳಿಗೆ ಪರಿಕಲ್ಪನೆಯ ರಚನೆಗೆ ಮೂರ್ತರೂಪದ ವಸ್ತುಗಳನ್ನು ಕೊಡಲಾಯಿತು, ಆನಂತರ ಚಿತ್ರಗಳ ಸಹಾಯದಿಂದ ಪರಿಕಲ್ಪನೆಗಳನ್ನು ಬಲಪಡಿಸಲಾಯಿತು ಮತ್ತು ಕೊನೆಯಲ್ಲಿ ಅಮೂರ್ತ ರೂಪದಲ್ಲಿ ಅಂದರೆ ಅಂಕಿಸಂಖ್ಯೆಗಳಲ್ಲಿ ಸಮಸ್ಯೆಗಳನ್ನು ಬಿಡಿಸಲು ನೀಡಲಾಗಿತ್ತು) ಕಲಿಯುವಂತಹ ಮಕ್ಕಳು ಗಮನಾರ್ಹವಾಗಿ ಕಲಿಕಾ ನಷ್ಟವನ್ನು ಅನುಭವಿಸಿರುವುದು ಕಂಡುಬಂದಿತು. ಈ ವಿಧಾನದಲ್ಲಿ ಕಲಿತ, ಈ ಮೊದಲು ಏರಿಕೆ ಮತ್ತು ಇಳಿಕೆಯ ಕ್ರಮದಲ್ಲಿ ಎರಡು ಅಂಕಿಯ ಸಂಖ್ಯೆಗಳನ್ನು ಗುರುತಿಸಿ ಬರೆಯಲು ಬಲ್ಲವರಾಗಿದ್ದ, ಕಡಿಮೆ ಮತ್ತು ಹೆಚ್ಚಿನ ಮೊತ್ತದ ಸಂಖ್ಯೆಗಳನ್ನು ಗುರುತಿಸಲು ತಿಳಿದಿದ್ದ, ಕೂಡುವಿಕೆ ಮತ್ತು ಕಳೆಯುವಿಕೆಯ ಬಗ್ಗೆ ಅರ್ಥಮಾಡಿಕೊಂಡಿದ್ದು ಅದನ್ನು ಮಾಡುವ ವಿಧಾನವನ್ನು (ವರ್ಗಕ್ಕೆ ಸೂಕ್ತವಾದ ಪರಿಕಲ್ಪನೆಗಳು) ಬಲ್ಲವರಾಗಿದ್ದ 4ನೇ ತರಗತಿಯ ಮೂವರು ಮಕ್ಕಳು ತಾವು ಈ ಮೊದಲು ಕಲಿತಿದ್ದಷ್ಟು ಪ್ರಮಾಣದಲ್ಲಿ ಪರಿಕಲ್ಪನೆಯನ್ನು ಹೊಂದಿಲ್ಲದಿರುವುದು ಕಂಡುಬಂದಿತು. ಉದಾಹರಣೆಗೆ, ಕಡಿಮೆ ಅಥವಾ ಹೆಚ್ಚಿನ ಮೊತ್ತದ ಸಂಖ್ಯೆಗಳ ನಡುವಿನ ವ್ಯತ್ಯಾಸವನ್ನು ತೋರಿಸಲು ಅವರಿಗೆ ಸಾಧ್ಯವಾಗಲಿಲ್ಲ, 30ನ್ನು ಪಡೆಯಲು 20ಕ್ಕೆ ಯಾವ ಸಂಖ್ಯೆಯನ್ನು ಸೇರಿಸಬೇಕು ಎಂದು ಹೇಳಲು ಸಾಧ್ಯವಾಗಲಿಲ್ಲ ಮತ್ತು 5+3=? ಇದನ್ನು ಅರ್ಥಮಾಡಿಕೊಂಡು ಈ ಸಮಸ್ಯೆಯನ್ನು ಬಿಡಿಸಲು ಸಾಧ್ಯವಾಗಲಿಲ್ಲ. ಈ ಮಕ್ಕಳಿಗೆ ಇವೆಲ್ಲವುಗಳನ್ನು ಗ್ರಹಿಸಲು ಸಾಧ್ಯವಾಗದೆ ಇರುವುದರಿಂದ 4ನೇ ತರಗತಿಗೆ ನಿಗದಿಯಾಗಿರುವ ಗಣಿತದ ವಿಷಯವನ್ನು

ಕಲಿಸಲು ಹೋಗುವುದೇ ನಿಷ್ಪ್ರಯೋಜಕ. ಈ ಮಕ್ಕಳಿಗೆ 1ನೇ ತರಗತಿಯಲ್ಲಿ ಏನನ್ನು ಕಲಿಸಲಾಗಿತ್ತೋ ಅಲ್ಲಿಂದಲೇ ಮತ್ತೊಮ್ಮೆ ನಾವು ಕಲಿಸಬೇಕಿದೆ.

ಅದೇ ರೀತಿಯಲ್ಲಿ, ಕನ್ನಡವಲ್ಲದೆ ಬೇರೆ ಮಾತೃಭಾಷೆ ಆಡುವ ಮಕ್ಕಳಿಗೆ ಈ ಸಂದರ್ಭದಲ್ಲಿ ಕನ್ನಡದ ಪರಿಚಯವೇ ಇರಲಿಲ್ಲ. ಕನ್ನಡ ಅಕ್ಷರಗಳನ್ನೇ ಮರೆತಿರುವ ಇವರಿಗೆ ಈಗ ಮತ್ತೆ ಅಕ್ಷರ, ಗುಣಿತಾಕ್ಷರ ಮತ್ತು ಒತ್ತಕ್ಷರಗಳನ್ನು ಕಲಿಸಬೇಕಿದೆ. ಇದರಿಂದಾಗಿ, ಕಲಿಕೆಯ ಈ ನಷ್ಟವನ್ನು 30ರಿಂದ 40 ದಿನಗಳಲ್ಲಿ ತುಂಬಿಕೊಡುವುದು ಸಾಧ್ಯವಿಲ್ಲ.

**ಆರಂಭಿಕ ಕಲಿಕೆಗೆ ಹೆಚ್ಚಿನ ಒತ್ತು**

ಸೇತುಬಂಧ ಕಾರ್ಯಕ್ರಮವು ಈಗ ಮುಕ್ತಾಯವಾಗಿದ್ದು ಶಾಲೆಗಳಲ್ಲಿ ಎಲ್ಲಾ ವರ್ಗಗಳಿಗೂ ಪಠ್ಯಪುಸ್ತಕಗಳು ಬಂದು ತಲುಪಿವೆ. ಆದ್ದರಿಂದ ಆಯಾ ವರ್ಗಕ್ಕೆ ಸೂಕ್ತವಾದ ಕಲಿಕಾಬೋಧನೆಯನ್ನು ಕೈಗೊಳ್ಳಬೇಕಾಗುತ್ತದೆ. ಅದು ಆಯಾ ತರಗತಿಗೆ ಸೂಕ್ತವಾಗುವಂತೆ ರೂಪಿಸಲಾದ ಭಾಷೆ ಮತ್ತು ಗಣಿತದಲ್ಲಿನ ಪ್ರಾರಂಭಿಕ ಪರಿಕಲ್ಪನೆಗಳು (ಓದು, ಬರವಣಿಗೆ, ಸಂಖ್ಯೆಯ ಪರಿಕಲ್ಪನೆಗಳು, ಕೂಡುವಿಕೆ, ಕಳೆಯುವಿಕೆ, ಗುಣಾಕಾರ, ಭಾಗಾಕಾರ) ಮತ್ತು ಇತರ ಮೂಲಭೂತ ಪರಿಕಲ್ಪನಾ ಜ್ಞಾನವನ್ನು ಅವಲಂಬಿಸಿರುತ್ತದೆ. ಸಾರಸಂಗ್ರಹವಾಗಿ ಹೇಳುವುದಾದರೆ, ಅರ್ಥಪೂರ್ಣ ಕಲಿಕೆ ಆಗಿದೆ ಎನ್ನುವುದು ಖಾತರಿಯಾಗಬೇಕಾದರೆ ಮಕ್ಕಳು ಆರಂಭಿಕ ಭಾಷೆ ಮತ್ತು ಗಣಿತದ ಕೌಶಲಗಳನ್ನು ಕಲಿತಿದ್ದಾರೆ ಎಂಬುದನ್ನು ನಾವು ಖಚಿತಪಡಿಸಿಕೊಂಡಿರಬೇಕು. ಮೊದಲಿಗೆ ಇವುಗಳನ್ನು ಆಯಾ ಮಟ್ಟಕ್ಕೆ ಸೂಕ್ತವಾದ ಪರಿಕಲ್ಪನೆಗಳೊಂದಿಗೆ ಕಲಿಸಬೇಕಾಗಿದೆ. ವಿಜ್ಞಾನ ಮತ್ತು ಸಮಾಜ ವಿಜ್ಞಾನದ ಪಾಠಗಳನ್ನು ಕಲಿಸುವಾಗ ನಾವು ಆರಂಭಿಕ ಪರಿಕಲ್ಪನೆಗಳೊಂದಿಗೆ ಪ್ರಾರಂಭಿಸಬೇಕು. ಕಲಿಕೆಯ ಈ ಅಂತರವನ್ನು ತುಂಬಲು ಪ್ರಯತ್ನಿಸದಿದ್ದಲ್ಲಿ ಮಕ್ಕಳು ಕಲಿಕೆಯಲ್ಲಿ ಆಸಕ್ತಿಯನ್ನು ಕಳೆದುಕೊಳ್ಳಬಹುದು ಮತ್ತು ಶಾಲೆಯಿಂದ ಹೊರಗುಳಿಯಬಹುದು.

**ಮುಂದಿನ ಹಾದಿ**

*ಸಾಮರ್ಥ್ಯಗಳ ಮೌಲ್ಯಮಾಪನ*

ಈ ಮೊದಲೇ ಹೇಳಲಾಗಿರುವ ಕಾರಣಗಳಿಂದಾಗಿ ಪ್ರತಿ ಮಗುವಿನ ಕಲಿಕೆಯ ಮಟ್ಟವನ್ನು ಅರ್ಥಮಾಡಿಕೊಳ್ಳುವುದು ಬಹಳ ಮುಖ್ಯ. ನಾವು ಸರಳ, ಅನೌಪಚಾರಿಕ ಮತ್ತು ಅರ್ಥಪೂರ್ಣ ಮೌಲ್ಯಮಾಪನ ವಿಧಾನಗಳನ್ನು ಬಳಸಬೇಕಾಗಿದೆ. ಮಕ್ಕಳು ಶಾಲೆಗೆ ಬಂದಾಗ ಅಥವಾ ಶಿಕ್ಷಕರು ಸಮುದಾಯಗಳಿಗೆ ಭೇಟಿ ನೀಡಿದಾಗ, ಸಂಭಾಷಣೆಯ ರೂಪದಲ್ಲಿ ಮೌಲ್ಯಮಾಪನವನ್ನು ನಡೆಸಬಹುದು. ಸರಳವಾದ ಪದಗಳು ಮತ್ತು ವಾಕ್ಯಗಳನ್ನು ಓದಿಸುವ ಮೂಲಕ ಹಾಗೂ ಗಣಿತದ ಸರಳವಾದ ಸಮಸ್ಯೆಗಳನ್ನು ಬಿಡಿಸುವಂತೆ ಕೇಳುವ ಮೂಲಕ ಮಕ್ಕಳಿಗೆ ಸರಳ ಪ್ರಶ್ನೆಗಳನ್ನು ಹಾಕಬಹುದು. ಇವುಗಳ ಮೂಲಕ, ಆರಂಭಿಕ ಭಾಷೆ, ಗಣಿತ ಮತ್ತು ಇತರ ವಿಷಯಗಳಲ್ಲಿ ಪ್ರತಿ ಮಗುವಿನ ಸಾಮರ್ಥ್ಯವನ್ನು ನಿರ್ಣಯಿಸಬಹುದು. ಇದು ಬೋಧನೆಯನ್ನು ಪ್ರಾರಂಭಿಸಲು ಅಗತ್ಯವಿರುವ ಹಂತದ ತಿಳುವಳಿಕೆಯನ್ನು ನಮಗೆ ಒದಗಿಸುತ್ತದೆ. ಮತ್ತು

ಮಕ್ಕಳ ಕಲಿಕೆಯ ಅಗತ್ಯಗಳ ಆಧಾರದ ಮೇಲೆ ಅವರನ್ನು ಗುಂಪುಗಳಲ್ಲಿ ವಿಂಗಡಿಸಲು ನಮಗೆ ನೆರವಾಗುತ್ತದೆ.

**ಪುನರಾರಂಭ**

ಎಲ್ಲಿಯವರೆಗೆ ಶಾಲೆಗಳು ತೆರೆಯದೆ ಮುಚ್ಚಿಯೇ ಇರುತ್ತವೆಯೋ ಅಲ್ಲಿಯವರೆಗೆ ಶಿಕ್ಷಕರು ಮಕ್ಕಳಿಗೆ ಕಲಿಸಬೇಕಾದರೆ ಅವರ ಸಮುದಾಯದ ಬಳಿಗೆ ತೆರಳಬೇಕಾಗುತ್ತದೆ. ಎರಡರಿಂದ ಮೂರು ಮಕ್ಕಳ ಚಿಕ್ಕ ಚಿಕ್ಕ ಗುಂಪುಗಳನ್ನು ರಚಿಸಿಕೊಂಡು ಈ ಕಲಿಕೆಯನ್ನು ನಾವು ಪ್ರಾರಂಭಿಸಬಹುದು. ಪ್ರತಿಯೊಂದು ಪರಿಕಲ್ಪನೆಯನ್ನು ಕಲಿಸಿದ ನಂತರ ಮಕ್ಕಳು ಕಲಿತುದನ್ನು ಅಭ್ಯಾಸ ಮಾಡಲು ಅವರಿಗೆ ಸರಳವಾದ ಕಾರ್ಯಹಾಳೆಯನ್ನು ನೀಡಬೇಕು. ಪ್ರತಿ ಮಗುವಿನ ಪ್ರಗತಿಯನ್ನು ಗುರುತಿಸಲು ನಿಯತವಾಗಿ ಅನೌಪಚಾರಿಕ ಮೌಲ್ಯಮಾಪನವನ್ನು ಕೈಗೊಳ್ಳಬೇಕು. ಇವೆಲ್ಲವುಗಳ ಸಂಗ್ರಹ ಸಂಪುಟ (ಪೋರ್ಟ್‌ಪೋಲಿಯೋ) ವನ್ನು ಪ್ರತಿ ಮಗುವಿಗಾಗಿ ನಿರ್ವಹಣೆ ಮಾಡಬೇಕು ಮತ್ತು ಈ ಮೌಲ್ಯಮಾಪನದ ಸಾರಾಂಶವನ್ನು ಅದರಲ್ಲಿ ಸೇರಿಸಬೇಕು. ಮಗುವು ನಿರ್ದಿಷ್ಟ ಪರಿಕಲ್ಪನೆಯ ಸ್ಪಷ್ಟ ತಿಳಿವಳಿಕೆಯನ್ನು ಪಡೆದುಕೊಂಡ ನಂತರವೇ ಮುಂದಿನ ಪರಿಕಲ್ಪನೆಯನ್ನು ಪರಿಚಯಿಸಬೇಕು. ಒಂದು ನಿರ್ದಿಷ್ಟ ಪರಿಕಲ್ಪನೆಯ ಮೇಲೆ ನಾವು ಒಂದೇ ಒಂದು ಕಾರ್ಯಹಾಳೆಯನ್ನು ಬಳಸಿದರೆ ಸಾಕಾಗುವುದಿಲ್ಲ. ಏಕೆಂದರೆ, ಪ್ರತಿ ಗುಂಪಿನಲ್ಲೂ ಕಲಿಕೆಯ ವಿವಿಧ ಹಂತಗಳಲ್ಲಿರುವ ಮಕ್ಕಳು ಇರುತ್ತಾರೆ. ಆದ್ದರಿಂದ, ವೈವಿಧ್ಯಮಯ ಕಲಿಕಾ ಅಗತ್ಯಗಳನ್ನು ಪೂರೈಸಲು ಪ್ರತಿ ಪರಿಕಲ್ಪನೆಗೆ ಅನುಸಾರವಾಗಿ ಹಲವಾರು ಕಾರ್ಯಹಾಳೆಗಳನ್ನು ವಿನ್ಯಾಸಗೊಳಿಸಬೇಕಾಗುತ್ತದೆ. ಉದಾಹರಣೆಗೆ, ನಾವು ನಾಲ್ಕು–ಅಂಕಿಯ ಸಂಖ್ಯೆಗಳ ಕೂಡುವಿಕೆಯನ್ನು ಕಲಿಸಬೇಕಾದರೆ ಈ ಕೆಳಗೆ ವಿವರಿಸಿರುವ ಹಂತಗಳನ್ನು ಅನುಸರಿಸಬಹುದು:

**ಹಂತ: 1** ಒಂದು ಅಂಕಿಯ ಸಂಖ್ಯೆಯಿಂದ ಪ್ರಾರಂಭಿಸುವುದು. ನಿತ್ಯ ಬದುಕಿನ ಸಂಗತಿಯೊಂದನ್ನು ಉದಾಹರಣೆಯಾಗಿಟ್ಟುಕೊಂಡು ಸರಳವಾಗಿ ಬಿಡಿಸಲು ಸಾಧ್ಯವಾಗುವ ಲೆಕ್ಕವೊಂದನ್ನು ವಾಕ್ಯರೂಪದಲ್ಲಿ ನೀಡುವುದು. ಇದು ಮಗುವಿಗೆ ಕೂಡುವ ಲೆಕ್ಕದ ಪರಿಕಲ್ಪನೆಯನ್ನು ಮೂಡಿಸುತ್ತದೆ. ಮಗುವಿಗೆ ಒಂದು ವೇಳೆ ಈ ಸಮಸ್ಯೆಯನ್ನು ಬಿಡಿಸಲು ತಿಳಿಯದೆ ಇದ್ದರೆ ಆ ಮಗುವಿಗೆ ಮೂರ್ತರೂಪದಲ್ಲಿ ವಸ್ತುಗಳನ್ನು ಕೊಟ್ಟು ಕೂಡಿಸುವ ಲೆಕ್ಕವನ್ನು ಕಲಿಸಬೇಕಾಗುತ್ತದೆ. ಇದೇ ಕ್ರಮವನ್ನು ಅನುಸರಿಸಿ, ಸಂಖ್ಯೆಗಳನ್ನು ಬಳಸಿಕೊಂಡು ಅವುಗಳನ್ನು ಪ್ರತಿನಿಧಿಸುವುದನ್ನು ಮಕ್ಕಳಿಗೆ ಕಲಿಸಬಹುದು. ನಿಧಾನ ಕಲಿಕೆಯ ಮಕ್ಕಳಿಗೆ ಮೂರ್ತರೂಪದ ವಸ್ತುಗಳನ್ನು ಮತ್ತು ವಿವಿಧ ಚಟುವಟಿಕೆಗಳನ್ನು ಬಳಸುವುದು ಅವಶ್ಯಕ. ಮಗುವು ಸಮಸ್ಯೆಗಳನ್ನು ಸರಾಗವಾಗಿ ಬಿಡಿಸಲು ಪ್ರಾರಂಭಿಸಿದ ನಂತರ, ಮುಂದಿನ ಅಭ್ಯಾಸಕ್ಕಾಗಿ ಕಾರ್ಯಹಾಳೆಗಳನ್ನು ನೀಡಬೇಕು.

**ಹಂತ: 2** ಇಲ್ಲಿಂದ ಮುಂದಕ್ಕೆ ನೀಡುವ ಲೆಕ್ಕಗಳನ್ನು ಎರಡು ಅಂಕಿಗಳ ಸಂಖ್ಯೆಯಲ್ಲಿ (20 ರವರೆಗೆ) ನೀಡಬೇಕು. ಒಂದು ಅಂಕಿಯ ಸಂಖ್ಯೆಗಳ ಲೆಕ್ಕಗಳನ್ನು ಬಿಡಿಸಲು ಕಷ್ಟಪಟ್ಟ ಮಕ್ಕಳಿಗೆ ಕೊಡುವ ಹಾಗೆಯೇ ಮೂರ್ತರೂಪದ ವಸ್ತುಗಳನ್ನು ನೀಡಬೇಕು. ಅವರು ಸಮಸ್ಯೆಗಳನ್ನು ಬಿಡಿಸಲು ಪ್ರಾರಂಭಿಸಿದ ನಂತರ ಇನ್ನು ಮುಂದೆ ಅಭ್ಯಾಸ ಮಾಡುವುದಕ್ಕಾಗಿ ಕಾರ್ಯಹಾಳೆಗಳನ್ನು ಅವರಿಗೆ ಕೊಡಬಹುದು.

**ಹಂತ: 3** ಸಣ್ಣ ಎರಡು–ಅಂಕಿಯ ಸಂಖ್ಯೆಗಳನ್ನು ಬಳಸಿಕೊಂಡು ಕೂಡುವ ಲೆಕ್ಕ ಮಾಡುವಾಗ ಹತ್ತರ ಸ್ಥಾನಕ್ಕೆ ದಶಕ ತೆಗೆದುಕೊಳ್ಳುವುದಕ್ಕೆ ಹತ್ತರ ಕಟ್ಟುಗಳನ್ನು ಬಳಸಿಕೊಂಡು ವಿವರಿಸಬಹುದು. ದಶಕ ತೆಗೆದುಕೊಂಡು ಕೂಡುವ ಲೆಕ್ಕ ಮಾಡುವುದನ್ನು ಅರ್ಥಮಾಡಿಕೊಳ್ಳಲು ಹೆಚ್ಚಿನ ಮಕ್ಕಳು ಪ್ರಯಾಸಪಡುತ್ತಾರೆ. ಆದ್ದರಿಂದ ಹತ್ತರ ಕಟ್ಟುಗಳನ್ನು ಬಳಸಿ ಹಲವು ಲೆಕ್ಕಗಳನ್ನು ಮಾಡಲು ಅವಕಾಶ ಕಲ್ಪಿಸುವುದು ಅವಶ್ಯಕ. ಅಭ್ಯಾಸ ಮಾಡುವುದು ಹೆಚ್ಚಿದಂತೆಲ್ಲ ಪರಿಕಲ್ಪನೆಯ ಸ್ಪಷ್ಟತೆ ಉತ್ತಮಗೊಳ್ಳುತ್ತದೆ. ದಶಕ ತೆಗೆದುಕೊಂಡು ಕೂಡುವ ಲೆಕ್ಕ ಮಾಡುವ ಕ್ರಮಾವಳಿಯ (ಅಲ್ಗಾರಿದಮ್) ಹಂತಗಳನ್ನು ಕಲಿಯಲು ಇದು ಮಕ್ಕಳಿಗೆ ಸಹಾಯ ಮಾಡುತ್ತದೆ.

**ಹಂತ: 4** ಮಕ್ಕಳು ಹತ್ತರ ಕಟ್ಟುಗಳನ್ನು ಬಳಸಿ ಕೂಡುವ ಲೆಕ್ಕ ಮಾಡಲು ಕಲಿತ ನಂತರ, ಸಂಖ್ಯೆಗಳನ್ನು ಕೊಟ್ಟು ಕ್ರಮಾವಳಿಯನ್ನು (ಅಲ್ಗಾರಿದಮ್) ಬಳಸಿಕೊಂಡು ಸಮಸ್ಯೆ ಬಿಡಿಸಲು ಕೊಡಬೇಕು. ಅವರು ಸರಿಯಾದ ಹಂತಗಳನ್ನು ಬಳಸಿಕೊಂಡು ಕೂಡುವ ಲೆಕ್ಕ ಮಾಡಬೇಕು. ಅಭ್ಯಾಸಕ್ಕಾಗಿ ಕಾರ್ಯಹಾಳೆಗಳನ್ನು ಕೊಡಬೇಕು.

**ಹಂತ: 5** ಮೇಲಿನ ಪರಿಕಲ್ಪನೆಗಳನ್ನು ಮಕ್ಕಳು ಪರಿಚಯಿಸಿಕೊಂಡ ನಂತರ, ಮೂರು ಮತ್ತು ನಾಲ್ಕು ಅಂಕೆಗಳ ಸಂಖ್ಯೆಗಳನ್ನು ಬಳಸಿಕೊಂಡು ಹೆಚ್ಚುವರಿ ಸಮಸ್ಯೆಗಳನ್ನು ನೀಡಬಹುದು. ಮಕ್ಕಳು ಮೂರ್ತರೂಪದ ವಸ್ತುಗಳನ್ನಿಟ್ಟುಕೊಂಡು ಅಭ್ಯಾಸ ಮಾಡಿದ ನಂತರ ಸಂಖ್ಯೆಯಲ್ಲಿ ಸಮಸ್ಯೆಗಳನ್ನು ನೀಡಬೇಕು. ಪ್ರತಿ ಪರಿಕಲ್ಪನೆಗೆ ಸಂಬಂಧಿಸಿದಂತೆ ಪ್ರತಿ ಹಂತದ ಅಭ್ಯಾಸಕ್ಕಾಗಿ ಕಾರ್ಯಹಾಳೆಗಳನ್ನು ಸಿದ್ಧಪಡಿಸಬೇಕು.

**ಹಂತ: 6** ಈ ಹಂತದಲ್ಲಿ ಒಂದರಿಂದ ನಾಲ್ಕು ಅಂಕಿಯ ಸಂಖ್ಯೆಗಳನ್ನು ಬಳಸಿಕೊಂಡು ಕೂಡುವ ಲೆಕ್ಕಗಳಿರುವ ಕಾರ್ಯಹಾಳೆಯನ್ನು ನೀಡಬೇಕು. ಇದು ಅಂತಿಮ ಮೌಲ್ಯಮಾಪನದ ಕಾರ್ಯಹಾಳೆ ಆಗಿರುತ್ತದೆ. ಅಂತಿಮ ಮೌಲ್ಯಮಾಪನ ಕಾರ್ಯಹಾಳೆಯನ್ನು ಸರಿಯಾಗಿ ಪೂರ್ಣಗೊಳಿಸಲು ಸಾಧ್ಯವಾಗುವ ಮಕ್ಕಳಿಗೆ ಹೊಸ ಪರಿಕಲ್ಪನೆಗಳನ್ನು ಪರಿಚಯಿಸಬಹುದು. ಕಾರ್ಯಹಾಳೆಯನ್ನು ಪೂರ್ಣಗೊಳಿಸಲು ಸಾಧ್ಯವಾಗದ ಮಕ್ಕಳಿಗೆ ತಪ್ಪುಗಳಾಗಿರುವುದನ್ನು ಗುರುತಿಸಿ ಅಗತ್ಯವಿರುವ ಪರಿಕಲ್ಪನೆಗಳನ್ನು ಮತ್ತೊಮ್ಮೆ ಕಲಿಸಬೇಕು. ಇದಾದ ನಂತರ ಮೌಲ್ಯಮಾಪನವನ್ನು ಪುನರಾವರ್ತಿಸಬೇಕು.

ನಿಜ ಜೀವನಕ್ಕೆ ಸಂಬಂಧಿಸಿದವುಗಳನ್ನು ವಾಕ್ಯ ರೂಪದಲ್ಲಿ ಗಣಿತದ ಸಮಸ್ಯೆಗಳೊಂದಿಗೆ ಪ್ರತಿ ಹಂತವನ್ನು ಪರಿಚಯಿಸುವುದು ಅಪೇಕ್ಷಣೀಯವಾಗಿದೆ. ಅಂತಿಮ ಮೌಲ್ಯಮಾಪನಕ್ಕಿಂತ ಮೊದಲು ಪ್ರತಿ ಎರಡು ಹಂತಗಳ ನಂತರದ ಒಂದೊಂದು ಮೌಲ್ಯಮಾಪನವನ್ನು ಕೂಡ ನಡೆಸಬಹುದು. ಪ್ರತಿಯೊಂದು ಹಂತದ ಕಲಿಕೆ ಮತ್ತು ಮೌಲ್ಯಮಾಪನದ ವಿವರಗಳನ್ನು ದಾಖಲಿಸಬೇಕು ಮತ್ತು ಈವರೆಗಿನ ಪ್ರಕ್ರಿಯೆಯ ಸಂಗ್ರಹ ಸಂಪುಟದ (ಪೋರ್ಟ್‌ಫೋಲಿಯೋ) ಭಾಗವಾಗಿ ಇದನ್ನು ಸೇರಿಸಬೇಕು.

ಎಲ್ಲ ಮಕ್ಕಳ ಪ್ರಗತಿಯನ್ನು ನಿಯತಕಾಲಿಕವಾಗಿ ಪರಿಶೀಲಿಸುತ್ತಿರಬೇಕು. ನಿಧಾನ ಕಲಿಕೆಯ ಮಕ್ಕಳ ಕುರಿತು ನಾವು ವಿಶೇಷ ಆಸ್ಥೆ ವಹಿಸಬೇಕು, ಅಂದರೆ, ನಾವು ಸ್ವಲ್ಪ ಹೆಚ್ಚುವರಿ ಪ್ರಯತ್ನಗಳನ್ನು ಮಾಡಬೇಕು. ಈ ಮೂಲಕ ಮಾತ್ರ ಮಗುವಿಗೆ ಉತ್ತಮ ಭವಿಷ್ಯವನ್ನು ಹೊಂದುವುದು ಸಾಧ್ಯವಾಗುತ್ತದೆ. ಮಕ್ಕಳು ಚೆನ್ನಾಗಿ ಕಲಿಯುತ್ತಲಿದ್ದರೆ ಮತ್ತು ಕಲಿಕೆಯ ನಿರಂತರತೆ ಇದ್ದರೆ ಅವರು  ಶಾಲಾವ್ಯವಸ್ಥೆಯಲ್ಲಿ ಉಳಿಯುತ್ತಾರೆ.

*ಮಕ್ಕಳು ಹೊರಗುಳಿಯದಂತೆ ತಡೆಯುವುದು*

ಶಾಲೆ ಪ್ರಾರಂಭವಾದಾಗಲೆಲ್ಲಾ ಮಕ್ಕಳನ್ನು ಮರಳಿ ಶಾಲೆಗೆ ಕರೆತರುವುದು ನಮ್ಮ ಮುಖ್ಯ ಕಾರ್ಯವಾಗಿರುತ್ತದೆ. ಈ ಸಮಯದಲ್ಲಿ ಮಕ್ಕಳು ವಿವಿಧ ರೀತಿಯ ಶಾರೀರಿಕ, ಮಾನಸಿಕ ಮತ್ತು ಲೈಂಗಿಕ ಹಿಂಸೆಗೆ ಒಳಗಾಗಿರಬಹುದು. ಕೆಲವರು ತಮ್ಮ ಹೆತ್ತವರನ್ನು ಅಥವಾ ಕುಟುಂಬದ ಇತರರನ್ನು ಕಳೆದುಕೊಂಡಿರಬಹುದು. ನಮಗೆ ತಿಳಿದಿರುವಂತೆ, ಮನೆಯಲ್ಲಿ ಆರ್ಥಿಕ ತೊಂದರೆಯಿಂದಾಗಿ ಅನೇಕ ಮಕ್ಕಳು ದುಡಿಯಲು ಪ್ರಾರಂಭ ಮಾಡಿದ್ದಾರೆ. ಈ ಮಕ್ಕಳನ್ನು ಮರಳಿ ಶಾಲೆಗೆ ಕರೆತರುವುದು ತುಂಬಾ ಕಷ್ಟಕರ. ಮಕ್ಕಳನ್ನು ಮರಳಿ ಶಾಲೆಗೆ ಕಳುಹಿಸುವಂತೆ ಮನವೊಲಿಸಲು ಪಾಲಕರು ಪೋಷಕರ ನಡುವೆ ಮಾತುಕತೆ ನಡೆಸುವುದು ಅನಿವಾರ್ಯ. ಮಕ್ಕಳೊಂದಿಗೂ ನಾವು ಮಾತುಕತೆ ನಡೆಸಬೇಕು. ಇದು ಕಷ್ಟಕರವಾದ ಕೆಲಸವೆಂದು ತೋರಿದರೂ ಈ ನಿಟ್ಟಿನಲ್ಲಿ ಪ್ರಯತ್ನ ನಡೆಸುವುದು ಅತ್ಯವಶ್ಯಕವಾಗಿದೆ.

ಪ್ರಸ್ತುತ ಮಕ್ಕಳು ನಿಯಮಿತವಾಗಿ ಶಾಲೆಗೆ ಹೋಗುವ ಅಭ್ಯಾಸವನ್ನು ಕಳೆದುಕೊಂಡಿದ್ದಾರೆ. ಇದಕ್ಕೆ ಮೊದಲು ಆಗಾಗ್ಗೆ ಗೈರು ಹಾಜರಾಗುತ್ತಿದ್ದ ಮಕ್ಕಳು ಶಾಲೆಗೆ ಹಿಂದಿರುಗಲು ಆಸಕ್ತಿ ಹೊಂದಿಲ್ಲ. ಈ ಮಕ್ಕಳನ್ನು ಭೇಟಿ ಮಾಡಿ ಮತ್ತೆ ಶಾಲೆಗೆ ಬರುವಂತೆ ಅವರ ಮನವೊಲಿಸಬೇಕಾಗಿದೆ. ಮಕ್ಕಳ ಮಾನಸಿಕ ಸ್ಥಿತಿ ಮತ್ತು ಅವರು ಎದುರಿಸುತ್ತಿರುವ ಸಮಸ್ಯೆಗಳನ್ನು ಅರ್ಥಮಾಡಿಕೊಂಡು ಅವರನ್ನು ಪ್ರೀತಿಯಿಂದ ನಡೆಸಿಕೊಳ್ಳುವುದು ಮಾತ್ರ ಗೈರುಹಾಜರಿಯನ್ನು ತಡೆಯುವ ಏಕೈಕ ಮಾರ್ಗವಾಗಿದೆ. ಮಕ್ಕಳು ಶಾಲೆಗಳಿಗೆ ಹಿಂದಿರುಗಿ ಬಂದಾಗ, ಅವರು ಶೈಕ್ಷಣಿಕ ಕಲಿಕೆಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವ ಮೊದಲು ಅವರಿಗೆ ಆಸಕ್ತಿ ಇರುವಂತಹ ಚಟುವಟಿಕೆಗಳಾದ ಚಿತ್ರಗಳನ್ನು ರಚಿಸುವುದು, ಬಣ್ಣ ತುಂಬುವುದು ಮತ್ತಿತರ ಚಟುವಟಿಕೆಗಳಲ್ಲಿ ಅವರನ್ನು ತೊಡಗಿಸಿಕೊಳ್ಳಬೇಕು, ವಿಶೇಷವಾಗಿ ಕಲಿಕೆಯಲ್ಲಿ ಆಸಕ್ತಿ ಕಳೆದುಕೊಂಡವರಿಗೆ. ಶಾಲೆಯಲ್ಲಿ ಆಸಕ್ತಿ ಕಳೆದುಕೊಂಡ ಮಕ್ಕಳು ಕಲಿಕೆಯ ಚಟುವಟಿಕೆಗಳಲ್ಲಿ ಒಗ್ಗಿಕೊಳ್ಳಲು ಅವರಿಗೆ ಸ್ವಲ್ಪ ಸಮಯ ಬೇಕಾಗಬಹುದು. ತರಗತಿಯಲ್ಲಿ ಗಮನವಿಟ್ಟು ಕುಳಿತು ಪಾಠಗಳನ್ನು ಅನುಸರಿಸುವ ಅಭ್ಯಾಸವನ್ನು ಅವರು ಕಳೆದುಕೊಂಡಿರಬಹುದು. ಆದ್ದರಿಂದ, ಪಾಠಗಳನ್ನು ಯೋಜಿಸುವಾಗ ಅದು ಮಕ್ಕಳನ್ನು ಅವರ ತರಗತಿಯಿಂದಾಚೆಗೂ ಕರೆದೊಯ್ಯುವ ಹಾಗೆ ಸಾಕಷ್ಟು ಚಟುವಟಿಕೆಗಳು ಮತ್ತು ವೀಕ್ಷಣೆ, ಪ್ರಾಯೋಗಿಕ ಕೆಲಸಗಳು ಮತ್ತು ದತ್ತಾಂಶ ಸಂಗ್ರಹಣೆಗೆ ಸಾಕಷ್ಟು ಅವಕಾಶಗಳಿರುವಂತೆ ನೋಡಿಕೊಳ್ಳಬೇಕು. ಇದು ಮಕ್ಕಳ ಉತ್ಸಾಹ ಭರಿತ ಭಾಗವಹಿಸುವಿಕೆಯನ್ನು ಖಚಿತಪಡಿಸುತ್ತದೆ. ಅನೌಪಚಾರಿಕ ಮೌಲ್ಯಮಾಪನ ವಿಧಾನಗಳ ಮೂಲಕ ನಾವು ಮಕ್ಕಳ ಕಲಿಕೆಯನ್ನು (ಟ್ರ್ಯಾಕ್) ಮಕ್ಕಳ ಕಲಿಕೆಯನ್ನು ಹಿಂಬಾಲಿಸಿ ಗುರುತಿಸಿ ದಾಖಲಿಸುತ್ತಿರಬೇಕು.

ಕೋವಿಡ್–19 ಸಾಂಕ್ರಾಮಿಕವು ಅನೇಕ ಮಕ್ಕಳ ಬದುಕನ್ನು ಅಸ್ಥಿರಗೊಳಿಸಿತು. ಈ ಮಕ್ಕಳ ಭವಿಷ್ಯವನ್ನು ಕಾಪಾಡುವ ಜವಾಬ್ದಾರಿ ನಮ್ಮ ಮೇಲಿದೆ. ಅವರು ತಮ್ಮ ಕಲಿಕೆಯನ್ನು ಮುಂದುವರೆಸಲು ನಾವು ಸಾಕಷ್ಟು ಕ್ರಮಗಳನ್ನು ತೆಗೆದುಕೊಳ್ಳದ ಹೊರತು ಅನೇಕ ಮಕ್ಕಳು ಶಿಕ್ಷಣ ವ್ಯವಸ್ಥೆಗೆ ಸಂಪೂರ್ಣವಾಗಿ ತೆರೆದುಕೊಳ್ಳುವುದಿಲ್ಲ. ಶಾಲೆ ತೊರೆಯಲು ಮಕ್ಕಳನ್ನು ನಾವು ಬಿಟ್ಟುಬಿಟ್ಟರೆ ಭವಿಷ್ಯದಲ್ಲಿ ಅನೇಕ ಕುಟುಂಬಗಳು ಆರ್ಥಿಕ, ಸಾಮಾಜಿಕ ಮತ್ತು ಕೌಟುಂಬಿಕ ತೊಂದರೆಗಳನ್ನು ಎದುರಿಸಬೇಕಾಗುತ್ತದೆ. ಇದರಿಂದ ಸಮಾಜದಲ್ಲಿ ಇರುವ ಅಸಮಾನತೆ ಮತ್ತಷ್ಟು ಹೆಚ್ಚಾಗುತ್ತದೆ. ಶಾಲೆ ಮುಚ್ಚಿದ್ದರಿಂದಾಗಿ ಮಕ್ಕಳು ಒಂದೂವರೆ ವರ್ಷದಷ್ಟು ಕಾಲ ಸಂತೋಷದಾಯಕ ಶಾಲಾ ಜೀವನವನ್ನು ಕಳೆದುಕೊಂಡಿದ್ದಾರೆ. ಗುಣಮಟ್ಟದ ಶಿಕ್ಷಣ ಎಲ್ಲ ಮಕ್ಕಳ ಹಕ್ಕು. ಯಾವುದೇ ಸಂದರ್ಭದ್ಲೂ ಮಕ್ಕಳು ಅದರಿಂದ ವಂಚಿತರಾಗಕೂಡದು ಮತ್ತು ಮಕ್ಕಳ ಶಿಕ್ಷಣದ ಹಕ್ಕನ್ನು ರಕ್ಷಿಸುವುದು ನಮ್ಮ ಕರ್ತವ್ಯವಾಗಿದೆ.

***ಅಡಿಟಿಪ್ಪಣಿ***

*[1]ಸೇತುಬಂಧ ಕಾರ್ಯಕ್ರಮವನ್ನು ರಾಜ್ಯ ಸರ್ಕಾರವು ಕರ್ನಾಟಕದ ಎಲ್ಲಾ ಸರ್ಕಾರಿ ಕನ್ನಡ ಮಾಧ್ಯಮ ಶಾಲೆಗಳಲ್ಲಿ ಜಾರಿಗೆ ತಂದಿದೆ.*

***

**ನಂದಿನಿ ಶೆಟ್ಟಿ** ಅಜೀಂ ಪ್ರೇಮ್‌ಜಿ ಫೌಂಡೇಶನ್ ಸದಸ್ಯೆಯಾಗಿದ್ದು, ಬೆಂಗಳೂರು ನಗರ ಪ್ರದೇಶದ ಸರ್ಕಾರಿ ಶಾಲೆಗಳಲ್ಲಿ ಕೆಲಸ ಮಾಡುತ್ತಿದ್ದಾರೆ. ಅವರು ಬೆಂಗಳೂರಿನ ಜವಾಹರಲಾಲ್ ನೆಹರೂ ಸೆಂಟರ್ ಫಾರ್ ಅಡ್ವಾನ್ಸ್‌ಡ್ ಸೈಂಟಿಫಿಕ್ ರೀಸರ್ಚ್ (JNCSR) ನಿಂದ ಪಿಎಚ್ ಡಿ ಪದವಿ ಪಡೆದಿದ್ದಾರೆ. ಅವರನ್ನು nandini.shetty@azimpremjifoundation.org ಮೂಲಕ ಸಂಪರ್ಕಿಸಬಹುದು.

**ಕನ್ನಡ ಭಾಷೆಗೆ ಹತ್ತಿರವಾಗುವಂತೆ ಅಥವಾ ತಡೆಯಿಲ್ಲದ ಓದಿಗೆ ಸರಾಗವಾಗಲು ಭಾಷಾಂತರಿಸಲು ಪ್ರಯತ್ನಿಸಿದ ವಾಕ್ಯ/ಪದಗಳು; ದಯವಿಟ್ಟು ಪರಿಶೀಲಿಸಿ**

*Focus on Foundational Learning is Important - **ಆರಂಭಿಕ ಕಲಿಕೆಯತ್ತ ತೀವ್ರ ಗಮನ ಸದ್ಯದ ಅಗತ್ಯ***

*Numerical problems – **ಸರಳ ಲೆಕ್ಕಾಚಾರ***

*Problem solving (in math context) - **(ಗಣಿತದ) ಸಮಸ್ಯೆಗಳನ್ನು ಬಿಡಿಸಲು, ಸರಳ ಲೆಕ್ಕವನ್ನು/ಲೆಕ್ಕಾಚಾರ ಮಾಡಲು, ಸರಳ ಸಮಸ್ಯೆಗಳನ್ನು ಬಿಡಿಸಲು***

*Worksheet - **ಕಾರ್ಯಹಾಳೆ***

*Portfolio - **ಸಂಗ್ರಹ ಸಂಪುಟ***

*Carry over* - ***ದಶಕ ತೆಗೆದುಕೊ***

*Algorithm* ***– ಕ್ರಮಾವಳಿ (ಅಲ್ಗಾರಿದಮ್)***

*Tracking (ಮಕ್ಕಳ ಕಲಿಕೆಯನ್ನು* ***ಟ್ರ್ಯಾಕ್*** *ಮಾಡುತ್ತಿರಬೇಕು)* - ***ಮಕ್ಕಳ ಕಲಿಕೆಯನ್ನು ಹಿಂಬಾಲಿಸಿ ಗುರುತಿಸಿ ದಾಖಲಿಸುವುದು***